# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಆಗಸ್ಟ್ ೨೦, ೨೦೧೫ (ಶ್ರಾವಣ ೨೯, ಶಕ ವರ್ಷ ೧೯೩೭)<br>Bengaluru, Thursday, August 20, 2015 (Shravana 29, Shaka Varsha 1937) | ಸಂಚಿಕೆ ೩೪<br>Issue 34 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18.**

**ದಾವಾ ಸಂಖ್ಯೆ : ಜೆಆರ್‌ಬಿ/ಎಂಡಿ/37/2015–16**

| ವಾದಿ ವಿರುದ್ಧ | ಪ್ರತಿವಾದಿ |
|---|---|
| ಬೆಂಗಳೂರು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ನಂ–6, ಲಕ್ಷ್ಮೀಸಧನ, 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18.<br>ಪ್ರತಿನಿಧಿಸುವವರು<br>ಮುಖ್ಯಕಾರ್ಯನಿರ್ವಹಣಾಧಿಕಾರಿ | 1)ಶ್ರೀ ಕೆ. ಕೃಷ್ಣಮೂರ್ತಿ,<br>ನಂ.–4, ತೇಜಶ್ರೀ ನಿಲಯ, 1ನೇ ಕ್ರಾಸ್, ಚನ್ನಪ್ಪ ಲೇಔಟ್, ಕೊಟ್ಟಿಗೆಪಾಳ್ಯ, ನಾಗರಬಾವಿ, ಬೆಂಗಳೂರು.<br>2) ಶ್ರೀಎಂ ಮಲ್ಲಿಕಾರ್ಜುನಯ್ಯ,<br>ಮ್ಯಾನೇಜರ್, ಬಿಬಿಆರ್ & ಆರ್‌ಡಿಸಿಸಿ ಬ್ಯಾಂಕ್ ಲಿ., ಸಿಲ್ಕ್ ಎಕ್ಸ್‌ಚೇಂಜ್ ಶಾಖೆ, ಮೇಲುಕೋಟೆ, ಕನಕಪುರ ಟೌನ್ & ತಾ॥ ರಾಮನಗರ ಜಿಲ್ಲೆ.<br>3) ಶ್ರೀ ಎ.ಪಿ. ವಿರೂಪಾಕ್ಷಯ್ಯ,<br>ಹಿರಿಯ ಸಹಾಯಕರು, ಬಿಬಿಆರ್ & ಆರ್‌ಡಿಸಿಸಿ ಬ್ಯಾಂಕ್ ಲಿ., ಸಿಲ್ಕ್ ಎಕ್ಸ್‌ಚೆಂಜ್ ಶಾಖೆ, ನಂ.–53, 7ನೇ ಸಿ ಮೈನ್, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು–40.<br>4) ಕೆ.ಎ. ಪದ್ಮವತಿ,<br>ಮ್ಯಾನೇಜರ್, ನಂ.20, 6ನೇ ಕ್ರಾಸ್, ಪೈಪ್‌ಲೇನ್ ಮುಖ್ಯರಸ್ತೆ, ದತ್ತಾತ್ರೇಯ ದೇವಸ್ಥಾನದ ಹತ್ತಿರ, ಮಲ್ಲೇಶ್ವರಂ, ಬೆಂಗಳೂರು–03.<br>5) ಎಲ್. ಮುನೇಗೌಡ,<br>ನಂ–1124, 3ನೇ ಕ್ರಾಸ್, 2ನೇ ಮೈನ್, 5ನೇ ಹಂತ, ರಾಜರಾಜೇಶ್ವರಿನಗರ, ಬೆಂಗಳೂರು–98.<br>6) ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ,. ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>7) ಚೋಳನಾಯಕನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.,<br>ಚೋಳನಾಯಕನಹಳ್ಳಿ, ತಾವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>8) ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ.,<br>ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49.<br>9) ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ.,<br>ತಾವರೆಕೆರೆ ಮಾಗಡಿ ಮುಖ್ಯರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30 |

| | |
|---|---|
| | 10) ಟಿ.ವಿ. ಸಿದ್ದಪ್ಪ,<br>ಹಾಲಿ ನಿರ್ದೇಶಕರು, ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ತಾವರೆಕೆರೆ, ಮಾಗಡಿ ಮುಖ್ಯ ರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30. |
| | 11) ಬಿ. ನಾಗರಾಜು,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್ ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ತಾವರೆಕೆರೆ, ಮಾಗಡಿ ಮುಖ್ಯ ರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30. |
| | 12) ಸಿ. ಬಸಪ್ಪ,<br>ಹಾಲಿ ನಿರ್ದೇಶಕರು<br>ಚೋಳನಾಯಕನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಚೋಳನಾಯಕನಹಳ್ಳಿ ತಾವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74. |
| | 13) ನಾರಾಯಣ<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್ ಚೋಳನಾಯಕನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಚೋಳನಾಯಕನಹಳ್ಳಿ, ತಾವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74. |
| | 14) ಎಂ. ರಾಜಣ್ಣ,<br>ಹಾಲಿ ನಿರ್ದೇಶಕರು, ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ., ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49. |
| | 15) ಎಂ. ಭರತ್,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್, ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ., ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49. |
| | 16) ಬಿ. ಜಯರಾಮ್,<br>ಹಾಲಿ ನಿರ್ದೇಶಕರು, ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74. |
| | 17) ಎಂ. ಸುರೇಶ್,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್, ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74. |

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಮುನ್ನ ಜಪ್ತಿ ನೋಟೀಸು**

ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 17 ನೇ ಪ್ರತಿವಾದಿಗಳಿಂದ ರೂ. 11,47,60,000/– (ರೂ. ಹನ್ನೊಂದು ಕೋಟಿ ನಲವತ್ತೇಳು ಲಕ್ಷದ ಅರವತ್ತು ಸಾವಿರಗಳು ಮಾತ್ರ) ಹಾಗೂ ಈ ಮೊತ್ತಕ್ಕೆ ಸಾಲಿಯಾನ ಶೇ. 18% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆ ಜೊತೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 1ನೇ ಪ್ರತಿವಾದಿ ಧರ್ಮಪತ್ನಿಯಾದ ಶ್ರೀಮತಿ ಅನುಸೂಯ ಕೃಷ್ಣಮೂರ್ತಿರವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

1. ಅರ್ಜಿದಾರರು ಕಲಂ 103ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 1ನೇ ಪ್ರತಿವಾದಿಯು ವಾದಿ ಬ್ಯಾಂಕಿನ ನೌಕರವಾಗಿದ್ದು, ವಾದಿ ಬ್ಯಾಂಕಿನ ರೇಷ್ಮೆ ವಿನಿಯಮ ಶಾಖೆಯ ಮೇಲ್ವಿಚಾರಕರಾಗಿ ಅನೇಕ ರೀತಿಯಲ್ಲಿ ಹಣ ದುರಪಯೋಗ ಪಡಿಸಿಕೊಂಡಿದ್ದು, ಸದರಿ ಶಾಖೆಯಲ್ಲಿ 1ನೇ ಪ್ರತಿವಾದಿಯ ಪತ್ನಿ ಹೆಸರಿನಲ್ಲಿ **ಸೂರಜ್ ಡಿಜಿಟಲ್ ಪ್ರಿಂಟ್ಸ್** ಹೆಸರಿನಲ್ಲಿ ಉಳಿತಾಯ ಖಾತೆ ಸಂಖ್ಯೆ : 6190050004047ರಲ್ಲಿ ದಿನಾಂಕ : 03–10–2008 ರಂದು ಉಳಿತಾಯ ಖಾತೆಯನ್ನು ತೆರೆದು ಪ್ರಾರಂಭಿಕ ಶುಲ್ಕ ರೂ. 1,000–00 ಗಳಿಂದ ಪ್ರಾರಂಭಿಸಿ ಮೊದಲನೇ ಹಂತದಲ್ಲಿ ಸಾಮಾನ್ಯ ವ್ಯವಹಾರ ನಡೆಸಿದ್ದು, ನಂತರ ವರ್ಷಗಳಲ್ಲಿ ಹೆಚ್ಚಿನ ವ್ಯವಹಾರ ನಡೆದಿದ್ದು, ಅನೇಕ ದಿನಾಂಕಗಳಲ್ಲಿ ಕೃಷಿ ಪತ್ತಿನ ಸಾಲ ವಿತರಣೆಯಾಗಿರುವ ದಿನಾಂಕಗಳಲ್ಲಿ 1ನೇ ಪ್ರತಿವಾದಿ ಹೆಂಡತಿಯ ಖಾತೆಗೆ ಕೆ.ಸಿ.ಸಿ. ಸಾಲ ದುರುಪಯೋಗದ ಮೊತ್ತ ಸದರಿ ಉಳಿತಾಯ ಖಾತೆಗೆ ಜಮಾ ಆಗಿರುವುದು ದಾಖಲಾತಿಗಳಿಂದ ದೃಢಪಟ್ಟಿರುವುದಾಗಿ ತನ್ನ ಪ್ರಮಾಣ ಪತ್ರದಲ್ಲಿ ವಾದಿ ಬ್ಯಾಂಕು ಸ್ಪಷ್ಟಪಡಿಸಿರುತ್ತದೆ. ಜೊತೆಗೆ 1ನೇ ಪ್ರತಿವಾದಿಯ ಹೆಂಡತಿ ಗೃಹಿಣಿಯಾಗಿದ್ದು, ಆಸ್ತಿ ಖರೀದಿಸಲು ಸಾಕಷ್ಟು ಆದಾಯದ ಮೂಲಗಳು ಇಲ್ಲದ ಕಾರಣ ಸದರಿ ಆಸ್ತಿಗಳನ್ನಯ ದುರುಪಯೋಗದ ಹಣದಿಂದ ಖರೀದಿಸಿರುವುದು ಮತ್ತು ದುರುಪಯೋಗದ ಹಣ ಉಳಿತಾಯ ಖಾತೆಗೆ ವರ್ಗಾವಣೆಗೊಂಡಿರುವುದು ದೃಢಪಟ್ಟಿರುವುದಾಗಿ ಪ್ರತಿವಾದಿಸಿರುತ್ತಾರೆ ಹಾಗೂ ಅರ್ಜಿಯಲ್ಲಿ

ನಮೂದಿಸಿರುವ ಸ್ಥಿರಾಸ್ತಿಯು 1ನೇ ಪ್ರತಿವಾದಿ ಹೆಂಡತಿಯ ಹೆಸರಿನಲ್ಲಿರುವ ಋಣಭಾರ ರಾಹಿತ್ಯ ಪತ್ರ ಮತ್ತು ಕ್ರಯ ಪತ್ರದ ಪ್ರತಿಯನ್ನು ಹಾಜರುಪಡಿಸಿರುತ್ತಾರೆ. ಸದರಿ ಕ್ರಯ ಪತ್ರವನ್ನು ಪರಿಶೀಲಿಸಿದಾಗ 1ನೇ ಪ್ರತಿವಾದಿ ಬ್ಯಾಂಕಿನ ಶಾಖೆಯಲ್ಲಿ ಹೊಂದಿರುವ ಉಳಿತಾಯ ಖಾತೆಯಿಂದ ಹಣವನ್ನು ಪಾವತಿ ಮಾಡಿರುವುದು ಮೇಲನೋಟಕ್ಕೆ ರುಜುವಾತಾಗಿರುವುದಾಗಿ ವಾದಿ ಬ್ಯಾಂಕು ಪ್ರತಿವಾದಿಸಿರುತ್ತದೆ.

2. ಈ ಹಿನ್ನೆಲೆಯಲ್ಲಿ ದಾವೆಯನ್ನು ಹೂಡಲಾಗಿ ಆದರೆ, ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು, ಈ ಮಧ್ಯ 1 ನೇ ಪ್ರತಿವಾದಿ ಹೆಂಡತಿ ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿ 1 ಮತ್ತು ಆತನ ಹೆಂಡತಿ ಜೊತೆಯಾಗಿ ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 1ನೇ ಪ್ರತಿವಾದಿ ಹೆಂಡತಿ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಜಪ್ತಿ ಮಾಡುವಂತೆ ಕಲಂ 103 ರಡಿಯಲ್ಲಿ ಸಲ್ಲಿಸಿ, ಪ್ರಕರಣವು ಜರೂರಾಗಿರುವುದರಿಂದ ಜಪ್ತಿ ಪೂರ್ವ ಷರತ್ತುಬದ್ಧ ಆದೇಶವನ್ನು ಹೊರಡಿಸಬೇಕೆಂದು ಕೋರಿಕೊಂಡಿರುತ್ತಾರೆ. ಅರ್ಜಿಯ ಜೊತೆ ಸ್ಥಿರಾಸ್ತಿಯ ಋಣಭಾರ ರಾಹಿತ್ಯ ಪತ್ರ ಮತ್ತು ಕ್ರಯ ಪತ್ರದ ನಕಲನ್ನು ಹಾಜರುಪಡಿಸಿರುತ್ತಾರೆ.

3. ಈ ನ್ಯಾಯಾಲಯವು ಎಲ್ಲಾ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿದ ನಂತರ 1ನೇ ಪ್ರತಿವಾದಿ ಹೆಂಡತಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡುವುದು ಇಲ್ಲವಾದಲ್ಲಿ ವಾದಿ ಬ್ಯಾಂಕಿಗೆ ಹೆಚ್ಚಿನ ಆರ್ಥಿಕ ಹೊರೆ ಬೀಳುವ ಸಂಭವವಿದ್ದು ಹಾಗೂ ವಾದಿ ಬ್ಯಾಂಕು ಬಡ ಕೃಷಿಕರಿಗೆ ಸಾಲದ ರೂಪದಲ್ಲಿ ಮಂಜೂರು ಮಾಡುವ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದರಿಂದ ಅರ್ಜಿಯಲ್ಲಿನ ಸ್ಥಿರಾಸ್ತಿಯನ್ನು ಜಪ್ತಿ ಮಾಡುವುದು ಎಲ್ಲಾ ರೀತಿಯಲ್ಲಿ ಸಮಂಜಸವೆಂಬುದು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ.

1ನೇ ಪ್ರತಿವಾದಿ ಹೆಂಡತಿಯು ತನಗೆ ಸಾಕಷ್ಟು ಆದಾಯದ ಮೂಲಗಳಿದ್ದು, ಆಸ್ತಿಗಳನ್ನು ಖರೀದಿಸಿರುವುದಾಗಿ ದಾಖಲಾತಿಗಳೊಂದಿಗೆ ನ್ಯಾಯಾಲಯಕ್ಕೆ ಮನವರಿಕೆ ಮಾಡಿ ಜಪ್ತಿ ಆದೇಶದಿಂದ ಮುಕ್ತರಾಗಲು, ಮುಕ್ತ ಅವಕಾಶಗಳಿರುತ್ತವೆ.

ಅರ್ಜಿಯಲ್ಲಿ ನಮೂದಿಸಿರುವ ಆಸ್ತಿಯನ್ನು ಜಪ್ತಿ ಪೂರ್ವ ಆದೇಶ ಮಾಡಲು ಸಾಕಷ್ಟು ಪುರಾವೆಗಳಿದ್ದು, ಶ್ರೀಮತಿ ಅನುಸೂಯ ಕೃಷ್ಣಮೂರ್ತಿ 1ನೇ ಪ್ರತಿವಾದಿಯ ಕಾನೂನುಬದ್ಧ ಹೆಂಡತಿಯಾಗಿ 1ನೇ ಪ್ರತಿವಾದಿಯು ದುರುಪಯೋಗದ ಹಣದಿಂದ ಆಸ್ತಿಯನ್ನು ಖರೀದಿಸಿರುವುದು ಮೇಲ್ನೋಟಕ್ಕೆ ದೃಢಪಡುತ್ತದೆ. ಹಾಗೂ 1ನೇ ಪ್ರತಿವಾದಿ ಹೆಂಡತಿ ಹೆಸರಿನಲ್ಲಿ ರೇಷ್ಮೆ ವಿನಿಮಯ ಶಾಖೆಯಲ್ಲಿ ಉಳಿತಾಯ ಖಾತೆ ತೆರೆದು ಅದರ ಮುಖಾಂತರ ವ್ಯವಹರಿಸಿರುವುದು ಸಹ ದೃಢಪಡುತ್ತದೆ. 1ನೇ ಪ್ರತಿವಾದಿಯು ದುರಾಲೋಚನೆ ಹಾಗೂ ದೂರಾಲೋಚನೆ ಎರಡನ್ನು ಮಾಡಿ ಬ್ಯಾಂಕಿನ ಹಣವನ್ನು ದುರುಪಯೋಗ ಪಡಿಸಿಕೊಂಡು ಸದರಿ ಹಣದಲ್ಲಿ ಚಿರಾಸ್ತಿಯ ತನ್ನ ಹೆಂಡತಿಯ ಹೆಸರಿನಲ್ಲಿ ಬೇನಾಮಿ ಮಾಡಿಸಿರುವುದು ಕಂಡುಬಂದಿರುವ ಹಿನ್ನೆಲೆಯಲ್ಲಿ ಕಲಂ 103 ರಡಿಯಲ್ಲಿ ತಿಳಿಸಿರುವ 1ನೇ ಪ್ರತಿವಾದಿಯ ಹೆಂಡತಿ ಹೆಸರಿನಲ್ಲಿರುವ ಚಿರಾಸ್ತಿಗಳನ್ನು ಜಪ್ತಿ ಮಾಡುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯ ಪಡುತ್ತಾ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಂಎಲ್/2010, ದಿನಾಂಕ:17.02.2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿ ಹೆಂಡತಿಯಾದ ಶ್ರೀಮತಿ ಅನುಸೂಯ ಕೃಷ್ಣಮೂರ್ತಿರವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯ ಈ ಪ್ರಕರಣದ ಅಂತಿಮ ತೀರ್ಪಿಗೆ ಆದೇಶ ಪೂರ್ವ ಜಪ್ತಿ ಮಾಡಿ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ.

ಒಂದು ವೇಳೆ 1 ನೇ ಪ್ರತಿವಾದಿಯು ಅಥವಾ ಆತನ ಹೆಂಡತಿಯು ದಾವಾ ಅರ್ಜಿಯಲ್ಲಿ ಕ್ಲೈಂ ಮಾಡಿರುವ ಹಣ ರೂ. 11,47,60,000–00 (ಹನ್ನೊಂದು ಕೋಟಿ ನಲವತ್ತು ಏಳು ಲಕ್ಷ ಅರವತ್ತು ಸಾವಿರಗಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತಿನ ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್ ಅನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ 1ನೇ ಪ್ರತಿವಾದಿಯ ಹೆಂಡತಿ ಈ ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಅವಶ್ಯಕ ಇರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಷರತ್ತುಬದ್ಧ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಜಪ್ತಿ ಪೂರ್ವ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

**Schedule property belongs to first respondent wife, Smt. Anusuya Krishnamurthy w/o K. Krishnamurthy purchased on 25-10-2012**

**Schedule property**

All that piece and parcel of the property bearing property No. 31, old assesment No. 91/1, New assesment No. 91/2 Katha No. 263, BBMP Ward No. 69, measuring east to west 88+80/2ft and north to sourt 40ft, in total 3360 Sq. ft. with 1000 sq.ft. built up area situated at Laggere Village Yeshwanthapur Hobli, Bengaluru North Taluk Bangalore Bounded on

East by : 80ft wide Road
West by : Halla & others Property
North by : Site No. 32
South by : Site No.30

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ : 22.06.2015 ರಂದು ಹೊರಡಿಸಿರುತ್ತೇನೆ.

**P.R. 657** **ಡಿ.ಪಾಂಡುರಂಗ ಗರಗ್**

**SC-10** ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18.**

**ದಾವಾ ಸಂಖ್ಯೆ : ಜೆಆರ್‌ಬಿ/ಎಂಡಿ/37/2015–16**

| ವಾದಿ ವಿರುದ್ಧ | ಪ್ರತಿವಾದಿ |
|---|---|
| ಬೆಂಗಳೂರು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ನಂ–6, ಲಕ್ಷ್ಮೀಸಧನ, 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18.<br>ಪ್ರತಿನಿದಿಸುವವರು<br>ಮುಖ್ಯಕಾರ್ಯನಿರ್ವಹಣಾಧಿಕಾರಿ | 1)ಶ್ರೀ ಕೆ. ಕೃಷ್ಣಮೂರ್ತಿ,<br>ನಂ.–4, ತೇಜಶ್ರೀ ನಿಲಯ, 1ನೇ ಕ್ರಾಸ್, ಚನ್ನಪ್ಪ ಲೇಔಟ್, ಕೊಟ್ಟಿಗೆಪಾಳ್ಯ, ನಾಗರಬಾವಿ, ಬೆಂಗಳೂರು.<br>2) ಶ್ರೀಎಂ ಮಲ್ಲಿಕಾರ್ಜುನಯ್ಯ,<br>ಮ್ಯಾನೇಜರ್, ಬಿಬಿಆರ್ & ಆರ್‌ಡಿಸಿಸಿ ಬ್ಯಾಂಕ್ ಲಿ., ಸಿಲ್ಕ್ ಎಕ್ಸ್‌ಚೇಂಜ್ ಶಾಖೆ, ಮೇಲುಕೋಟೆ, ಕನಕಪುರ ಟೌನ್ & ತಾ॥ ರಾಮನಗರ ಜಿಲ್ಲೆ.<br>3) ಶ್ರೀ ಎ.ಪಿ. ವಿರೂಪಾಕ್ಷಯ್ಯ,<br>ಹಿರಿಯ ಸಹಾಯಕರು, ಬಿಬಿಆರ್ & ಆರ್‌ಡಿಸಿಸಿ ಬ್ಯಾಂಕ್ ಲಿ., ಸಿಲ್ಕ್ ಎಕ್ಸ್‌ಚೆಂಜ್ ಶಾಖೆ, ನಂ.–53, 7ನೇ ಸಿ ಮೈನ್, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು–40.<br>4) ಕೆ.ಎ. ಪದ್ಮವತಿ,<br>ಮ್ಯಾನೇಜರ್, ನಂ.20, 6ನೇ ಕ್ರಾಸ್, ಪೈಪ್‌ಲೇನ್ ಮುಖ್ಯರಸ್ತೆ, ದತ್ತಾತ್ರೇಯ ದೇವಸ್ಥಾನದ ಹತ್ತಿರ, ಮಲ್ಲೇಶ್ವರಂ, ಬೆಂಗಳೂರು–03.<br>5) ಎಲ್. ಮುನೇಗೌಡ,<br>ನಂ–1124, 3ನೇ ಕ್ರಾಸ್, 2ನೇ ಮೈನ್, 5ನೇ ಹಂತ, ರಾಜರಾಜೇಶ್ವರಿನಗರ, ಬೆಂಗಳೂರು–98.<br>6) ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ,. ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>7) ಚೋಳನಾಯಕನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.,<br>ಚೋಳನಾಯಕನಹಳ್ಳಿ, ತವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>8) ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ.,<br>ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49.<br>9) ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ.,<br>ತಾವರೆಕೆರೆ ಮಾಗಡಿ ಮುಖ್ಯರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30<br>10) ಟಿ.ವಿ. ಸಿದ್ದಪ್ಪ,<br>ಹಾಲಿ ನಿರ್ದೇಶಕರು, ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ತಾವರೆಕೆರೆ, ಮಾಗಡಿ ಮುಖ್ಯ ರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30. |

| | |
|---|---|
| | 11) ಬಿ. ನಾಗರಾಜು,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್ ತಾವರೆಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ತಾವರೆಕೆರೆ, ಮಾಗಡಿ ಮುಖ್ಯ ರಸ್ತೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–30.<br>12) ಸಿ. ಬಸಪ್ಪ,<br>ಹಾಲಿ ನಿರ್ದೇಶಕರು<br>ಚೋಳನಾಯಕನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಚೋಳನಾಯಕನಹಳ್ಳಿ ತಾವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>13) ನಾರಾಯಣ<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್ ಚೋಳನಾಯಕನಹಳ್ಳಿ ತಾವರೆಕೆರೆ ಹೋಬಳಿ, ತಿಪ್ಪಗೊಂಡನಹಳ್ಳಿ ಪೋಸ್ಟ್, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>14) ಎಂ. ರಾಜಣ್ಣ,<br>ಹಾಲಿ ನಿರ್ದೇಶಕರು, ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ., ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49.<br>15) ಎಂ. ಭರತ್,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಬಿದರಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ., ಬಿದರಹಳ್ಳಿ, ಬೆಂಗಳೂರು ಪೂರ್ವ ತಾ॥ ಬೆಂಗಳೂರು–49.<br>16) ಬಿ. ಜಯರಾಮ್,<br>ಹಾಲಿ ನಿರ್ದೇಶಕರು, ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74.<br>17) ಎಂ. ಸುರೇಶ್,<br>ಹಾಲಿ ಚೀಫ್ ಎಕ್ಸಿಕ್ಯೂಟೀವ್ ಆಫೀಸರ್, ರಾಮೋಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ರಾಮೋಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾ॥ ಬೆಂಗಳೂರು–74. |

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಮುನ್ನ ಜಪ್ತಿ ನೋಟೀಸು**

ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 17 ನೇ ಪ್ರತಿವಾದಿಗಳಿಂದ ರೂ. 11,47,60,000/– (ರೂ. ಹನ್ನೊಂದು ಕೋಟಿ ನಲವತ್ತೇಳು ಲಕ್ಷದ ಅರವತ್ತು ಸಾವಿರಗಳು ಮಾತ್ರ) ಹಾಗೂ ಈ ಮೊತ್ತಕ್ಕೆ ಸಾಲಿಯಾನ ಶೇ. 18% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆ ಜೊತೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 3ನೇ ಪ್ರತಿವಾದಿ ಧರ್ಮಪತ್ನಿಯಾದ ಶ್ರೀಮತಿ ಡಿ.ಹೆಚ್. ನಾಗಲಾಂಭಿಕರವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

1. ಅರ್ಜಿದಾರರು ಕಲಂ 103ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 3ನೇ ಪ್ರತಿವಾದಿಯು ವಾದಿ ಬ್ಯಾಂಕಿನ ನೌಕರನಾಗಿದ್ದು ವಾದಿ ಬ್ಯಾಂಕಿನ ರೇಷ್ಮೆ ವಿನಿಯಮ ಶಾಖೆಯ ನಗದು ಗುಮಾಸ್ತರಾಗಿ ಅನೇಕ ರೀತಿಯಲ್ಲಿ ಹಣ ದುರುಪಯೋಗ ಪಡಿಸಿಕೊಂಡಿದ್ದು, ಸದರಿ ಶಾಖೆಯಲ್ಲಿ 3ನೇ ಪ್ರತಿವಾದಿಯ ಪತ್ನಿ ಹೆಸರಿನಲ್ಲಿ ಕ್ರಯಕ್ಕೆ ಪಡೆದು ಸದರಿ ಹಣ ಬ್ಯಾಂಕಿನ ಹಣ ದುರುಪಯೋಗದ ಅವಧಿಯಲ್ಲಿ ಮಾಡಿರುತ್ತಾರೆಂದು ತನ್ನ ಪ್ರಮಾಣ ಪತ್ರದಲ್ಲಿ ವಾದಿ ಬ್ಯಾಂಕು ಸ್ಪಷ್ಟಪಡಿಸಿರುತ್ತದೆ. ಜೊತೆಗೆ 3ನೇ ಪ್ರತಿವಾದಿಯ ಹೆಂಡತಿ ಆಸ್ತಿ ಖರೀದಿಸಲು ಸಾಕಷ್ಟು ಆದಾಯದ ಮೂಲಗಳು ಇಲ್ಲದ ಕಾರಣ ಸದರಿ ಆಸ್ತಿಯನ್ನು ದುರುಪಯೋಗದ ಹಣದಿಂದ ಖರೀದಿಸಿರುವುದು ದೃಢಪಟ್ಟಿರುವುದಾಗಿ ಪ್ರತಿವಾದಿಸಿರುತ್ತಾರೆ ಹಾಗೂ ಅರ್ಜಿಯಲ್ಲಿ ನಮೂದಿಸಿರುವ ಸ್ಥಿರಾಸ್ತಿಯು 3ನೇ ಪ್ರತಿವಾದಿ ಹೆಂಡತಿಯ ಹೆಸರಿನಲ್ಲಿರುವ ಋಣಭಾರ ರಾಹಿತ್ಯ ಪತ್ರ ಮತ್ತು ಕ್ರಯ ಪತ್ರದ ಪ್ರತಿಯನ್ನು ಹಾಜರುಪಡಿಸಿರುತ್ತಾರೆ. ಸದರಿ ಕ್ರಯ ಪತ್ರವನ್ನು ಪರಿಶೀಲಿಸಿದಾಗ 3ನೇ ಪ್ರತಿವಾದಿಯು ತನ್ನ ಹೆಂಡತಿ ಹೆಸರಿನಲ್ಲಿ ದಿನಾಂಕ : 25–03–2012ರಂದು ಕ್ರಯಕ್ಕೆ ಪಡೆದಿರುವುದು ಮೇಲನೋಟಕ್ಕೆ ರುಜುವಾತಾಗಿರುವುದಾಗಿ ವಾದಿ ಬ್ಯಾಂಕು ಪ್ರತಿಪಾದಿಸಿರುತ್ತದೆ.

2. ಈ ಹಿನ್ನೆಲೆಯಲ್ಲಿ ದಾವೆಯನ್ನು ಹೂಡಲಾಗಿ ಆದರೆ, ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು, ಈ ಮಧ್ಯ 3ನೇ ಪ್ರತಿವಾದಿ ಹೆಂಡತಿ ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿ 3 ಮತ್ತು ಆತನ ಹೆಂಡತಿ ಜೊತೆಯಾಗಿ ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ

ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 3ನೇ ಪ್ರತಿವಾದಿ ಹೆಂಡತಿ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಜಪ್ತಿ ಮಾಡುವಂತೆ ಕಲಂ 103 ರಡಿಯಲ್ಲಿ ಅರ್ಜಿ ಸಲ್ಲಿಸಿ, ಪ್ರಕರಣವು ಜರೂರಾಗಿರುವುದರಿಂದ ಜಪ್ತಿ ಪೂರ್ವ ಷರತ್ತುಬದ್ಧ ಆದೇಶವನ್ನು ಹೊರಡಿಸಬೇಕೆಂದು ಕೋರಿಕೊಂಡಿರುತ್ತಾರೆ. ಅರ್ಜಿಯ ಜೊತೆ ಸ್ಥಿರಾಸ್ತಿಯ ಋಣಭಾರ ರಾಹಿತ್ಯ ಪತ್ರ ಮತ್ತು ಕ್ರಯ ಪತ್ರದ ನಕಲನ್ನು ಹಾಜರುಪಡಿಸಿರುತ್ತಾರೆ.

3. ಈ ನ್ಯಾಯಾಲಯವು ಎಲ್ಲಾ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿದ ನಂತರ 3ನೇ ಪ್ರತಿವಾದಿ ಹೆಂಡತಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡುವುದು ಇಲ್ಲವಾದಲ್ಲಿ ವಾದಿ ಬ್ಯಾಂಕಿಗೆ ಹೆಚ್ಚಿನ ಆರ್ಥಿಕ ಹೊರೆ ಬೀಳುವ ಸಂಭವವಿದ್ದು ಹಾಗೂ ವಾದಿ ಬ್ಯಾಂಕು ಬಡ ಕೃಷಿಕರಿಗೆ ಸಾಲದ ರೂಪದಲ್ಲಿ ಮಂಜೂರು ಮಾಡುವ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದರಿಂದ ಅರ್ಜಿಯಲ್ಲಿನ ಸ್ಥಿರಾಸ್ತಿಯನ್ನು ಜಪ್ತಿ ಮಾಡುವುದು ಎಲ್ಲಾ ರೀತಿಯಲ್ಲಿ ಸಮಂಜಸವೆಂಬುದು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ.

4. 3ನೇ ಪ್ರತಿವಾದಿ ಹೆಂಡತಿಯು ತನಗೆ ಸಾಕಷ್ಟು ಆದಾಯದ ಮೂಲಗಳಿದ್ದು, ಆಸ್ತಿಗಳನ್ನು ಖರೀದಿಸಿರುವುದಾಗಿ ದಾಖಲಾತಿಗಳೊಂದಿಗೆ ನ್ಯಾಯಾಲಯಕ್ಕೆ ಮನವರಿಕೆ ಮಾಡಿ ಜಪ್ತಿ ಆದೇಶದಿಂದ ಮುಕ್ತರಾಗಲು, ಮುಕ್ತ ಅವಕಾಶಗಳಿರುತ್ತವೆ.

5. ಅರ್ಜಿಯಲ್ಲಿ ನಮೂದಿಸಿರುವ ಆಸ್ತಿಯನ್ನು ಜಪ್ತಿ ಪೂರ್ವ ಆದೇಶ ಮಾಡಲು ಸಾಕಷ್ಟು ಪುರಾವೆಗಳಿದ್ದು, ಶ್ರೀಮತಿ ಡಿ.ಹೆಚ್. ನಾಗಲಾಂಭಿಕ 3ನೇ ಪ್ರತಿವಾದಿಯ ಕಾನೂನುಬದ್ಧ ಹೆಂಡತಿಯಾಗಿ 3ನೇ ಪ್ರತಿವಾದಿಯು ದುರುಪಯೋಗದ ಹಣದಿಂದ ಆಸ್ತಿಗಳನ್ನು ಖರೀದಿಸಿರುವುದು ಮೇಲ್ನೋಟಕ್ಕೆ ದೃಢಪಡುತ್ತದೆ. ಹಾಗೂ 3ನೇ ಪ್ರತಿವಾದಿಯು ದುರಾಲೋಚನೆ ಹಾಗೂ ದೂರಾಲೋಚನೆ ಎರಡನ್ನು ಮಾಡಿ ಬ್ಯಾಂಕಿನ ಹಣವನ್ನು ದುರುಪಯೋಗ ಪಡಿಸಿಕೊಂಡು ಸದರಿ ಹಣದಲ್ಲಿ ಚಿರಾಸ್ತಿಯನ್ನು ತನ್ನ ಹೆಂಡತಿಯ ಹೆಸರಿನಲ್ಲಿ ಬೇನಾಮಿ ಮಾಡಿಸಿರುವುದು ಕಂಡುಬಂದಿರುವ ಹಿನ್ನೆಲೆಯಲ್ಲಿ ಕಲಂ 103 ರಡಿಯಲ್ಲಿ ತಿಳಿಸಿರುವ 3ನೇ ಪ್ರತಿವಾದಿಯ ಹೆಂಡತಿ ಹೆಸರಿನಲ್ಲಿರುವ ಚಿರಾಸ್ತಿಯನ್ನು ಜಪ್ತಿ ಮಾಡುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯ ಪಡುತ್ತಾ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಂಎಲ್/2010, ದಿನಾಂಕ : 17–02–2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 3ನೇ ಪ್ರತಿವಾದಿ ಹೆಂಡತಿಯಾದ ಶ್ರೀಮತಿ ಡಿ.ಹೆಚ್. ನಾಗಲಾಂಭಿಕರವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಈ ಪ್ರಕರಣದ ಅಂತಿಮ ತೀರ್ಪಿಗೆ ಆದೇಶ ಪೂರ್ವ ಜಪ್ತಿ ಮಾಡಿ ಷರತ್ತಿಗೊಳಪಟ್ಟು ಆದೇಶಿಸಲಾಗಿದೆ.

ಒಂದು ವೇಳೆ 3ನೇ ಪ್ರತಿವಾದಿಯು ಅಥವಾ ಆತನ ಹೆಂಡತಿಯು ದಾವಾ ಅರ್ಜಿಯಲ್ಲಿ ಕ್ಲೈಂ ಮಾಡಿರುವ ಹಣ ರೂ.11,47,60,000–00 (ಹನ್ನೊಂದು ಕೋಟಿ ನಲವತ್ತು ಏಳು ಲಕ್ಷ ಅರವತ್ತು ಸಾವಿರಗಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತಿನ ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್ ಅನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ 3ನೇ ಪ್ರತಿವಾದಿಯ ಹೆಂಡತಿ ಈ ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಅವಶ್ಯಕ ಇರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಷರತ್ತುಬದ್ಧ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಜಪ್ತಿ ಪೂರ್ವ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

**Schedule property belongs to Third first respondent wife, Smt. D.H. Nagalambika W/o V.P. Veerupakshya purchased on 25-12-2012**

**Schedule property**

All that piece and parcel of the property bearing property No. 352, as per form No. 10. Katha No. 519, Old Katha NO. 27/28, Assessment 27/28, measuring east to west 40ft and north to south 30ft, in total 1200 Sq. ft. situated at Kommaghatta village Kengeri Hobli, Bangalore South Taluk, Sulikere Gram Panchayath limits Bounded on

East by : Site No. 307
West by : Road
North by : Site No. 35
South by : Site No.353

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ : 22.06.2015 ರಂದು ಹೊರಡಿಸಿರುತ್ತೇನೆ.

**P.R. 658** **ಡಿ.ಪಾಂಡುರಂಗ ಗರಗ್**

**SC-10** ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**Government of India**

**Ministry of Labour**

**Labour Bureau**

**NO. 112/1 (KTK) /2014 CPI Dated: 1st June, 2015**

**Consumer Price Index Numbers for Industrial Workers (Base : 2001=100)**

**Month : APRIL, 2015**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 265 | 299 | 265 | 262 | 284 |
| (b) Pulses & Pulses Products | 306 | 312 | 311 | 277 | 284 |
| (c) Oils & Fats | 223 | 256 | 198 | 287 | 218 |
| (d) Meat, Fish & Eggs | 377 | 336 | 356 | 316 | 340 |
| (e) Milk Products | 314 | 273 | 252 | 266 | 286 |
| (f) Condiments & Spices | 249 | 289 | 283 | 277 | 292 |
| (g) Vegetables & Fruits | 342 | 307 | 317 | 316 | 310 |
| (h) Other Food | 271 | 297 | 271 | 275 | 286 |
| **FOOD GROUP** | (286) | (298) | (275) | (281) | (290) |
| Pan, Supari, Tobacco & Intoxicants | 265 | 272 | 299 | 240 | 324 |
| Fuel & Light | 215 | 186 | 210 | 353 | 208 |
| Housing index | 247 | 234 | 372 | 102 | 285 |
| Clothing, Bedding & Footwear | 168 | 160 | 172 | 199 | 192 |
| Miscellaneous | | | | | |
| (a) Medical care | 209 | 255 | 220 | 225 | 198 |
| (b) Education, Recreation and Amusement | 168 | 182 | 186 | 334 | 146 |
| (c) Transport and Communication | 318 | 338 | 331 | 322 | 262 |
| (d) Personal Care & Effects | 236 | 234 | 255 | 247 | 235 |
| (e) Others | 228 | 227 | 238 | 216 | 297 |
| Miscellaneous Group | (230) | (256) | (247) | (274) | (218) |
| **GENERAL INDEX** | 258 | 260 | 273 | 260 | 262 |

1. The Director, Directorate of Economic and Statistics, Mullstoreyed Building, Dr. B.R. Ambedekar Veedhi, Bangalore-560001.
2. The Labour Commissioner, Government of Karnataka, Kamic Bhavan, Bannekhetty Road, Bangalore-560029.
3. The Assistant Director, Labour Bureau, (SR) E-I-A, Rajaji Bhavan, Besanth Nagar, Chennai- 600 090.

**Dr. Devenda Singh**

**ASSISTANT DIRECTOR**

**ಜಂಟಿ ನಿರ್ದೇಶಕರು**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,

ಕರ್ನಾಟಕ ಸರ್ಕಾರ, ಬೆಂಗಳೂರು

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES/SIP/PWX/16/ 2015, dated : 01-06-2015**

**State : Karnataka** **Base : 1987-88=100** **Month : April 2015**

**Date : 01-06-2015**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| **I.** | **FOOD:** | | | | | | | | | | | |
| | (a) Cereals & Cereals Products | 969 | 919 | 1076 | 812 | 933 | 947 | 912 | 1059 | 806 | 1117 | 979 |
| | (b) Pulses & Pulse Products | 729 | 914 | 876 | 948 | 824 | 848 | 882 | 869 | 886 | 818 | 834 |
| | (c) Oil & Fats | 468 | 416 | 451 | 404 | 416 | 449 | 404 | 497 | 442 | 412 | 431 |
| | (d) Meat Fish & Eggs | 941 | 1114 | 1186 | 1013 | 1212 | 1080 | 1000 | 1081 | 729 | 1213 | 1116 |
| | (e) Milk & Milk Products | 757 | 708 | 777 | 879 | 766 | 797 | 759 | 797 | 684 | 776 | 770 |
| | (f) Condiments & Spices | 613 | 805 | 1051 | 956 | 652 | 685 | 927 | 854 | 729 | 774 | 815 |
| | (g) Vegetables & Fruits | 756 | 907 | 1032 | 914 | 709 | 869 | 935 | 926 | 855 | 626 | 1227 |
| | (h) Other Food | 627 | 963 | 897 | 919 | 706 | 638 | 770 | 743 | 843 | 658 | 674 |
| | **FOOD GROUP INDEX** | **795** | **871** | **959** | **853** | **803** | **807** | **847** | **929** | **775** | **888** | **871** |
| **II.** | Pan, Supari, Tobacco & Intoxicants | 941 | 1118 | 1058 | 967 | 782 | 1042 | 820 | 884 | 639 | 903 | 1080 |
| **III.** | Fuel & Light | 685 | 628 | 731 | 805 | 780 | 804 | 758 | 766 | 612 | 975 | 535 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 367 | 575 | 509 | 521 | 404 | 465 | 648 | 749 | 365 | 730 | 235 |
| **VI.** | **Miscellaneous:** | | | | | | | | | | | |
| | (a) Medical Care | 876 | 966 | 741 | 550 | 429 | 442 | 768 | 743 | 468 | 557 | 378 |
| | (b) Education, Recreation & Amusement | 900 | 793 | 1239 | 547 | 1004 | 1148 | 942 | 641 | 1165 | 1585 | 1114 |
| | (c) Transport & Communication | 844 | 831 | 770 | 788 | 868 | 792 | 818 | 1114 | 920 | 777 | 763 |
| | (d) Personal Car & effects | 444 | 566 | 656 | 632 | 741 | 520 | 548 | 555 | 557 | 550 | 528 |
| | (e) Other | 662 | 573 | 732 | 925 | 510 | 528 | 553 | 750 | 423 | 706 | 470 |
| | Miscellaneous Group | 694 | 698 | 807 | 682 | 706 | 669 | 693 | 689 | 685 | 771 | 613 |
| | **GENERAL INDEX** | 662 | 711 | 777 | 722 | 653 | 668 | 722 | 773 | 649 | 772 | 600 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**P.R. 665**

**SC-5**

**ಜಂಟಿ ನಿರ್ದೇಶಕರು**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,

ಕರ್ನಾಟಕ ಸರ್ಕಾರ, ಬೆಂಗಳೂರು

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ

**ಸಂಖ್ಯೆ : ಸಿಬ್ಬಂದಿ. ಶಿಸ್ತು.09/2010-11, ದಿನಾಂಕ : 02-07-2015.**

**ವಿಷಯ:-** ಶ್ರೀ ಎನ್. ನವೀನ್ ಕುಮಾರ್, ಭೂಮಾಪಕರು, ನಗರಮಾಪನ ಕಛೇರಿ ಹುಕ್ಕೇರಿ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:-**

1. ಸರ್ಕಾರದ ಪತ್ರ ಸಂಖ್ಯೆ : ಕಂಇ 118 ಭೂದಾಸೇ (3) 2013, ದಿನಾಂಕ : 24-11-2014.
2. ಈ ಕಛೇರಿಯ ಕಾರಣ ಕೇಳಿ ನೋಟಿಸು ಸಮಸಂಖ್ಯೆ : ದಿನಾಂಕ : 12-07-2010, ದಿನಾಂಕ : 06-06-2012.
3. ಈ ಕಛೇರಿ ನಡವಳಿ ದಿನಾಂಕ : 05-02-2011.
4. ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ : 28-02-2013, 08-070-2014.
5. ಭೂದಾಖಲೆಗಳ ಜಂಟಿ ನಿರ್ದೇಶಕರು ಮರುಭೂಮಾಪನ ಬೆಳಗಾವಿರವರ ಪತ್ರ ದಿನಾಂಕ : 05-08-2010.
6. ಭೂದಾಖಲೆಗಳ ಸಹಾಯಕ ನಿರ್ದೇಶಕರು ಮರುಭೂಮಾಪನ ಹುಕ್ಕೇರಿರವರ ಪತ್ರ ದಿನಾಂಕ : 27-04-2012.
7. ಭೂದಾಖಲೆಗಳ ಉಪ ನಿರ್ದೇಶಕರು ಜಿಲ್ಲಾಧಿಕಾರಿಗಳ ಕಛೇರಿ ದಾವಣಗೆರೆ ಜಿಲ್ಲೆ. ಇವರ ಪತ್ರ ಸಂಖ್ಯೆ ಭೂಮಾ. ಸಿಬ್ಬಂದಿ ಸಿಆರ್/14-15, ದಿನಾಂಕ : 05-03-2015.

**ಪ್ರಸ್ತಾವನೆ:-**

ಶ್ರೀ ನವೀನ್ ಕುಮಾರ್ ಇವರನ್ನು ಈ ಕಛೇರಿಯ ಅಧಿಕೃತ ಜ್ಞಾಪನ ಸಂ. ಸಿಬ್ಬಂದಿ. ಎದಭೂ.ನೇಮಕ.03/2000-01, ದಿನಾಂಕ : 02-03-20009ರಲ್ಲಿ ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗೆ ನೇಮಕ ಮಾಡಿರುತ್ತದೆ. ಸದರಿಯವರು ಇಲಾಖೆಯಲ್ಲಿ ದಿನಾಂಕ : 9-3-2009 ರಿಂದ ಕೆಲಸ ನಿರ್ವಹಿಸುತ್ತಿದ್ದಾರೆ. ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗೆ 2 ವರ್ಷಗಳ ಅವಧಿಯನ್ನು ಖಾಯಂ ಪೂರ್ವಾವಧಿ (ದಿನಾಂಕ : 9-3-2009 ರಿಂದ 8-3-2011) ಎಂದು ಗೊತ್ತುಪಡಿಸಿದ್ದು, ಸದರಿ ನೌಕರರು ಖಾಯಂ ಪೂರ್ವಾವಧಿಯಲ್ಲಿಯೇ ದಿನಾಂಕ : 25-01-2010 ರಿಂದ 20-12-2010 ರವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿವುದಲ್ಲದೇ ಭೂದಾಖಲೆಗಳ ಸಹಾಯಕ ನಿರ್ದೇಶಕರು ಮರುಭೂಮಾಪನ ಹುಕ್ಕೇರಿರವರ ಆದೇಶ ದಿನಾಂಕ : 14-09-2009ರಲ್ಲಿ ಸ್ಕ್ಯಾನಿಂಗ್ ಕೆಲಸಕ್ಕೆ ಸಂಬವಂಧಿಸಿದಂತೆ 10 ಗ್ರಾಮಗಳ ದಪ್ತರ್‌ಗಳಿಗೆ ಪಾನ್ ನಂ. ರೀ.ಸ.ನಂ. ನೀಡಲು ಹಾಗೂ ದಿನಾಂಕ : 07-10-2009ರ ಆದೇಶದಲ್ಲಿ ಗ್ರಾಮಗಳ ದಪ್ತರ್‌ಗಳ ಸ್ಕ್ಯಾನಿಂಗ್ ಪೂರ್ವಸಿದ್ದತಾ ಕೆಲಸಕ್ಕೆ ನಿಯೋಜಿಸಿದ್ದು ಅವರಿಗೆ ವಹಿಸಿದ ಕೆಲಸವನ್ನು ನಿರ್ವಹಿಸುವಲ್ಲಿ ವಿಫಲರಾಗಿರುವ ಕಾರಣ ಅವರ ಮೇಲೆ ಕೆ.ಸಿ.ಎಸ್ (ಸಿಸಿಎ) 1957ರನ್ವಯ ಶಿಸ್ತು ಕ್ರಮ ಜರುಗಿಸಲಾಗಿದೆ. ಹಾಗೂ ವಿಚಾರಣೆಗೆ ಹಾಜರಾಗಲು ನೋಟಿಸುಗಳನ್ನು ನೀಡಿದ್ದರೂ ವಿಚಾರಣೆಗೆ ಗೈರುಹಾಜರಾಗಿದ್ದು, ವಿಚಾರಣೆ ದಿನಾಂಕಗಳಂದು ಹಾಜರಾದ ಸಾಕ್ಷಿದಾರರ ಹೇಳಿಕೆಯಿಂದ ವಿಚಾರಣೆಯಿಂದ ಸದರಿಯವರ ಮೇಲೆ ಮಾಡಲಾದ ಆರೋಪಗಳು ಸಾಬೀತಾಗಿರುತ್ತದೆ. ವಿಚಾರಣಾ ವರದಿಯನ್ನು ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳಿ ನೋಟಿಸಿನೊಂದಿಗೆ ಜಾರಿಗೊಳಿಸಲಾಗಿದೆ. ಆಪಾದಿತ ನೌಕರರು ಎರಡನೇ ಕಾರಣ ಕೇಳಿ ನೋಟಿಸಿಗೆ ದಿನಾಂಕ : 30-12-2010 ರಂದು ಸಮಜಾಯಿಷಿಯನ್ನು ನೀಡಿದ್ದು, ಸದರಿ ಸಮಜಾಯಿಷಿಯಲ್ಲಿ "ಅನಾರೋಗ್ಯದಿಂದ ರಜೆಯ ಮೇಲೆ ತೆರಳಿದ್ದಾಗಿ ಹೇಳಿದ್ದಲ್ಲದೆ, ವಹಿಸಿದ ಕೆಲಸವನ್ನು ನಿರ್ವಹಿಸುವ ಸಂದರ್ಭದಲ್ಲಿ ಗಂಟಲು ನೋವು ಮತ್ತು ಬೆನ್ನು ನೋವಿನ ಕಾರಣಗಳಿಂದ ಮಾಡಲು ಸಾಧ್ಯವಾಗಲಿಲ್ಲವೆಂದು ಹೇಳಿ, ಅನಾರೋಗ್ಯದಿಂದ ಆಗಿರುವ ಅಡಚಣೆಯನ್ನು ಮನ್ನಿಸಬೇಕೆಂದು ಕೋರಿಕೊಂಡಿರುತ್ತಾರೆ." ಆದರೆ ಸದರಿಯವರ ಸಮಜಾಯಿಷಿಯನ್ನು ಒಪ್ಪಲು ಸಾಧ್ಯವಿಲ್ಲ. ಕಾರಣ ಯಾವುದೇ ಸಂದರ್ಭದಲ್ಲಿ ರಜೆಯ ಮೇಲೆ ಹೋಗಬೇಕಾದಲ್ಲಿ ಮೇಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆದು ರಜೆಯ ಮೇಲೆ ಹೋಗಲು ಆಪಾದಿತ ನೌಕರರಿಗೆ ಹೇರಳ ಅವಕಾಶವಿತ್ತು. ಇದು ಆಪಾದಿತ ನೌಕರರ ಸ್ವಯಂಕೃತ ಅಪರಾಧವಾಗಿರುತ್ತದೆ. ಅಲ್ಲದೆ ವಹಿಸಿದ ಕೆಲಸವನ್ನು ನಿರ್ವಹಿಸುವಲ್ಲಿ ವಿಫಲವಾಗಿರುವುದಕ್ಕೆ ನೀಡಿರುವ ಸಮಜಾಯಿಷಿಯು ಸಮಂಜಸವಾದ ಕಾರಣವಾಗಿರುವುದಿಲ್ಲ.

ನೌಕರರು ಪದೇ ಪದೇ ಕೆಲಸಕ್ಕೆ ಗೈರು ಹಾಜರಾಗಿ ನಂತರ ಅನಾರೋಗ್ಯ ನಿಮಿತ್ತ ವೈದ್ಯಕೀಯ ಆಧಾರದ ಮೇಲೆ ರಜೆ ಮೇಲೆ ತೆರಳುತ್ತಿರುವುದರಿಂದ ಮರುಭೂಮಾಪನ ಕೆಲಸ ನಿರ್ವಹಿಸಲು ಅಡಚಣೆಯಾಗಿದೆಯೆಂದು ಸದರಿಯವರನ್ನು ಬೇರೆ ಕಡೆ ವರ್ಗಾ ಮಾಡಬೇಕೆಂದು ಭೂ. ಜಂ. ನಿ. ಬೆಳಗಾವಿ ರವರ ಪತ್ರ ದಿನಾಂಕ : 05-06-2010ರಲ್ಲಿ ವರದಿ ಸಲ್ಲಿಸಿರುತ್ತಾರೆ.

**ನೌಕರರು ಗೈರು ಹಾಜರಾದ ಅವಧಿ ವಿವರ :**

| ಕ್ರ.ಸಂ. | ನೌಕರರ ಹೆಸರು | ಕೆಲಸ ನಿರ್ವಹಿಸುತ್ತಿದ್ದ ಕಛೇರಿ | ಅನಧಿಕೃತ ಗೈರುಹಾಜರಾದ ಅವಧಿ |
|---|---|---|---|
| | ಎನ್. ನವೀನ್ ಕುಮಾರ್ | ಭೂ.ಸ.ನಿ. ಮರು ಭೂಮಾಪನ, ಹುಕ್ಕೇರಿ | 10-10-2009 ರಿಂದ 10-01-2010 ರವರೆಗೆ ಗೈರುಹಾಜರಾಗಿ ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ದಿನಾಂಕ : 11-01-2010 ರಂದು ಹಾಜರಾಗಿದ್ದಾರೆ. |
| | | ಭೂ.ಸ.ನಿ. ಮರು ಭೂಮಾಪನ, ಹುಕ್ಕೇರಿ | 25-01-2010 ರಿಂದ 20-12-2010 ರವರೆಗೆ ಗೈರುಹಾಜರಾಗಿ ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ದಿನಾಂಕ : 21-12-2010 ರಂದು ಹಾಜರಾಗಿದ್ದಾರೆ. |
| | | ಭೂ.ಸ.ನಿ. ಮರು ಭೂಮಾಪನ, ಹುಕ್ಕೇರಿ | 16-03-2011 ರಿಂದ 24-04-2012 ರವರೆಗೆ ಗೈರುಹಾಜರಾಗಿ ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ದಿನಾಂಕ : 25-04-2012 ರಂದು ಹಾಜರಾಗಿದ್ದಾರೆ. |

| | | | |
|---|---|---|---|
| | | ತಹಸಿಲ್ದಾರ್ ದಾವಣಗೆರೆ | ಆಗಸ್ಟ್ 2013 : 16-08-2013, 17-08-2013, 19-08-2013<br>ಸೆಪ್ಟೆಂಬರ್ 2013 : 28-09-2013<br>ಅಕ್ಟೋಬರ್ 2013 : 01-10-2013<br>ಮೇ-2014 : 12-05-2014 ರಿಂದ 31-05-2014<br>ಜೂನ್ 2014 : 01-06-2014 ರಿಂದ 30-06-2014 (ವೈದ್ಯಕೀಯ ರಜೆ)<br>ಜುಲೈ 2014 : 01-07-2014, 02-07-2014, 19-07-2014<br>ಡಿಸೆಂಬರ್ 2014 : 26-12-2014, 27-12-2014 |

ಶಿಸ್ತು ನಡವಳಿಯ ನಂತರದಲ್ಲಿಯೂ ಸದರಿ ನೌಕರರ ನಡತೆಯಲ್ಲಿ ಯಾವುದೇ ಸುಧಾರಣೆ ಕಂಡು ಬರದೆ ಅನಧಿಕೃತ ಗೈರುಹಾಜರಿ ಪ್ರವೃತ್ತಿ ಮುಂದುವರೆಸಿಕೊಂಡು ಬಂದಿರುತ್ತಾರೆ.

ಉಲ್ಲೇಖ (7)ರ ಭೂ.ಉ. ನಿ. ದಾವಣಗೆರೆ ರವರ ಪತ್ರ ದಿನಾಂಕ : 05-03-2015ರಲ್ಲಿ ಸದರಿ ನೌಕರರು ತಹಶೀಲ್ದಾರ್ ದಾವಣಗೆರೆ ಕಾರ್ಯಾಲಯದಲ್ಲಿ ದಿನಾಂಕ : 01-03-2013 ರಂದು ಕರ್ತವ್ಯಕ್ಕೆ ಹಾಜರಾಗಿದ್ದು. ನೌಕರರು ವಿವಿಧ ದಿವಸಗಳಿಗೆ ಗೈರುಹಾಜರಾಗಿರುವುದು ಹಾಗು ಕಛೇರಿಯ ಸಿಬ್ಬಂದಿಗಳ ಜೊತೆ ಸೌಹಾರ್ದತೆ ವರ್ತನೆಯಿಲ್ಲದ ಕಾರಣ. ಇವರ ವರ್ತನೆ ವಿರುದ್ಧ ಮಹಿಳಾ ಸಿಬ್ಬಂದಿ ಜಿಲ್ಲಾಧಿಕಾರಿಗಳಿಗೆ ದೂರು ಸಲ್ಲಿಸಿದಂತೆ ಇವರನ್ನು ಜಗಳೂರು ತಾಲ್ಲೋಕಿಗೆ ನಿಯೋಜನೆ ಮಾಡಿದ್ದು ಅಲ್ಲಿಯೂ ಸಹ ಕಾರ್ಯ ನಿರ್ವಹಿಸದೇ ಪುನಃ ದಿನಾಂಕ : 15-01-2015 ರಿಂದ ವೈದ್ಯಕೀಯ ರಜೆ ಸಲ್ಲಿಸಿರುತ್ತಾರೆಂದು ನೌಕರರು ವಿವಿಧ ದಿನಗಳಿಗೆ ಗೈರುಹಾಜರಾದ ವಿವರದೊಂದಿಗೆ, ಸದರಿಯವರು ಅಡವಿ ಕೆಲಸ ನಿರ್ವಹಿಸಲು, ನಿಷ್ಠೆಯಿಂದ ಕೆಲಸ ನಿರ್ವಹಿಸಲು ವಿಫಲರಾಗಿರುವ ಬಗ್ಗೆ ವರದಿ ಮಾಡಿರುತ್ತಾರೆ.

ಸದರಿಯವರು ದಿನಾಂಕ : 10-10-2009 ರಿಂದ 10-01-2010 ರವರೆಗೆ, ದಿನಾಂಕ : 25-01-2010 ರಿಂದ 20-12-2010 ರವರೆಗೆ ಹಾಗು 16-03-2011 ರಿಂದ 24-04-2012 ರವರೆಗೆ ಸತತವಾಗಿ ಗೈರುಹಾಜರಾಗಿರುತ್ತಾರೆ. ಈ ಅನಧಿಕೃತ ಗೈರುಹಾಜರಿ ಬಗ್ಗೆ ಕರ್ನಾಟಕ ಸರ್ಕಾರ ಸೇವಾ ನಿಯಮಾವಳಿ ನಿಯಮ 1958ರ ನಿಯಮ 108ರಲ್ಲಿ 4 ತಿಂಗಳಿಗೂ ಮೀರಿ ರಜೆ ಪಡೆಯದೇ ಅನಧಿಕೃತ ಗೈರುಹಾಜರಿ ಅದಲ್ಲಿ ಅಂತಹ ನೌಕರರನ್ನು ವಿಚಾರಣೆ ಕೈಗೊಂಡು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಅವಕಾಶ ಕಲ್ಪಿಸಿರುತ್ತದೆ. ಆದರೆ ಸದರಿ ನೌಕರರ ಖಾಯಂ ಪೂರ್ವಾವಧಿಯು ನೌಕರರ ಸ್ವಯಂಕೃತ ಅಪರಾಧದಿಂದ ತೃಪ್ತಿಕರವೆಂದು ಘೋಷಣೆಯಾಗಿರುವುದಿಲ್ಲ. ಖಾಯಂ ಪೂರ್ವಾವಧಿ ಘೋಷಣೆಯಾಗದ ನೌಕರರ ನೇಮಕಾತಿ ಪ್ರಾಧಿಕಾರವು ನೌಕರರ ಸೇವೆಯು ತೃಪ್ತಿಕರವಲ್ಲವೆಂದು ಕಂಡುಬಂದಲ್ಲಿ ಸೇವೆಯಿಂದ ವಜಾ ಮಾಡುವ ಅಧಿಕಾರವನ್ನು ಕೆ.ಸಿ.ಎಸ್. (ಖಾಯಂ ಪೂರ್ವಾವಧಿ) 1977ರ ನಿಯಮಗಳ ನಿಯಮ 5(1)(ಬಿ)ರನ್ವಯ ಹೊಂದಿರುತ್ತದೆ.

ಕಾರಣ ಈ ನೌಕರರ ಅನಧಿಕೃತ ಗೈರುಹಾಜರಿ ಮತ್ತು ಅಶಿಸ್ತಿನ ಬಗ್ಗೆ ಕೆ.ಸಿ.ಎಸ್. (ಸಿ.ಸಿ.ಎ) ನಿಯಮ 1957ರನ್ವಯ ದೋಷಾರೋಪಣೆಯನ್ನು ಹೊರಡಿಸಿ, ಶಿಸ್ತು ಕ್ರಮ ಜರುಗಿಸಿ ದಂಡನೆ ವಿಧಿಸುವುದು ಅಪ್ರಸ್ತುತವೆಂದು ಕಂಡುಬಂದಿದ್ದು. ಖಾಯಂ ಪೂರ್ವಾವಧಿ ಘೋಷಣೆಯಾಗದ ಈ ನೌಕರ ಪೂರ್ಣ ಪ್ರಮಾಣದ ಸರ್ಕಾರಿ ನೌಕರರ ಎಂದು ಭಾವಿಸುವುದು ಸೂಕ್ತವಲ್ಲವೆಂದು ಸದರಿಯವರನ್ನು ಶಿಸ್ತು ಕ್ರಮಕ್ಕೆ ಒಳಪಡಿಸಿ ಸೇವೆಯಿಂದ ತೆಗೆದುಹಾಕುವುದಕ್ಕಿಂತ ಸರಳವಾಗಿ ಕೆ.ಸಿ.ಎಸ್. (ಖಾಯಂ ಪೂರ್ವಾವಧಿ) ನಿಯಮ 6 ರನ್ವಯ ತೆಗೆದುಹಾಕುವುದು ಸೂಕ್ತವೆಂದು ತೀರ್ಮಾನಿಸಿ ಈಗಾಗಲೇ ಇವರ ಮೇಲೆ ಶಿಸ್ತು ನಡೆವಳಿಯಲ್ಲಿ ಆರೋಪ ಸಾಬೀತಾದ ಕಾರಣ, ಕೆ.ಸಿ.ಎಸ್. (ಖಾಯಂ ಪೂರ್ವಾವಧಿ) 1977ರ ನಿಯಮಗಳ ನಿಯಮ 6ರನ್ವಯ ಸೇವೆಯಿಂದ ತೆಗೆದು ಹಾಕಲು ಉಲ್ಲೇಖ (4)ರ ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ : 28-02-2013, 08-07-2014ಗಳಲ್ಲಿ ಸರ್ಕಾರಕ್ಕೆ ಪ್ರಸ್ತಾವಿಸಿ, ಸದರಿ ನೌಕರರು ಸರ್ಕಾರಿ ಕೆಲಸಗಳನ್ನು ನಿರ್ವಹಿಸುವಲ್ಲಿ ವಿಫರಾಗಿದ್ದು, ಅದಕ್ಷ ನೌಕರರೆಂದು ಹಾಗು ಸರ್ಕಾರಿ ಕೆಲಸಕ್ಕೆ ಅಸಮರ್ಥರಾಗಿರುವುದರಿಂದ ಸರ್ಕಾರಿ ಸೇವೆಯಿಂದ ವಜಾಮಾಡಲು ಅನುಮತಿ ನೀಡಲು ಸರ್ಕಾರಕ್ಕೆ ಮನವಿ ಮಾಡಲಾಗಿರುತ್ತದೆ. ಉಲ್ಲೇಖ (1)ರ ಸರ್ಕಾರದ ಪತ್ರ ದಿನಾಂಕ : 24-11-2014ರಲ್ಲಿ "ಶ್ರೀ ನವೀನ್ ಕುಮಾರ್ ಪರಿವೀಕ್ಷಣಾ ಅವಧಿಯಲ್ಲಿರುವ ಭೂಮಾಪಕರು ಇವರು ತಮ್ಮ ಪರಿವೀಕ್ಷಣಾ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗುರುವುದಲ್ಲದೇ ಅವರ ಸೇವೆ ತೃಪ್ತಿಕರವಾಗಿಲ್ಲದಿರುವುದರಿಂದ ಹಾಗೂ ಸದರಿಯವರು ಸರ್ಕಾರದ ಖಾಯಂ ನೌಕರರಲ್ಲದಿರುವುದರಿಂದ, ಅವರ ವಿರುದ್ಧ ಕೆ.ಸಿ.ಎಸ್. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 6 ರನ್ವಯ ಕ್ರಮ ಜರುಗಿಸಲು" ನಿರ್ದೇಶನ ನೀಡಿರುತ್ತದೆ. ಈ ಮೇಲಿನ ಅಂಶಗಳನ್ನು ಒಳಗೊಂಡಂತೆ ಹಾಗೂ ಸರ್ಕಾರದ ಪತ್ರ ದಿನಾಂಕ : 24-11-2014ರ ನಿರ್ದೇಶನದ ಮೇರೆಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತಹಶೀಲ್ದಾರ್ ದಾವಣಗೆರೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ನವೀನ್ ಕುಮಾರ್ ಭೂಮಾಪಕರು ಇವರು ಖಾಯಂ ಪೂರ್ವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿರುವುದಲ್ಲದೆ, ತೃಪ್ತಿಕರವಾಗಿ ಸೇವೆಯನ್ನು ಸಹ ಸಲ್ಲಿಸಿರುವುದಿಲ್ಲ. ಇದರಿಂದಾಗಿ ಸದರಿಯವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರಾಗುತ್ತಾರೆ. ಹಾಗು 4 ತಿಂಗಳಿಗೂ ಮೀರಿ ಸರ್ಕಾರಿ ಕೆಲಸಕ್ಕೆ ಹಲವು ಬಾರಿ ಅನಧಿಕೃತ ಗೈರುಹಾಜರಾಗಿ ಸರ್ಕಾರಿ ಕೆಲಸದಲ್ಲಿ ಆಸಕ್ತಿ ಇಲ್ಲದೇ ಬೇಜವಾಬ್ದಾರಿತನದಿಂದ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) 1966 ರ ನಿಯಮ 3(i) (ii) (iii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ. ಆದ ಕಾರಣ ಮುನಿಶ್ ಮೌದ್ಗಿಲ್ ಭಾ.ಆ.ಸೇ., ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಸರ್ಕಾರದ ಪತ್ರ ದಿನಾಂಕ : 24-11-2014 ರ ನಿರ್ದೇಶನದ ಮೇರೆಗೆ ಹಾಗೂ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 6 ರನ್ವಯ ಸದರಿ ನೌಕರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕಲಾಗಿದೆ.

P.R. 698

**ಆಯುಕ್ತರು,**

ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ,
ಕೆ.ಆರ್. ವೃತ್ತ, ಬೆಂಗಳೂರು-560001.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಚೇರಿ ಶಿವಮೊಗ್ಗ ಜಿಲ್ಲೆ, ಸಹಕಾರ ಭವನ ಶಿವಮೊಗ್ಗ**
**ದೂರವಾಣಿ ಸಂಖ್ಯೆ 08182–222711**

**ವಿಷಯ:–** ಸಮಾಪನೆಯಲ್ಲಿರುವ **"ಶಿವಮೊಗ್ಗ ಸಹಕಾರ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ.,ಶಿವಮೊಗ್ಗ** ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:–** 1)ಈ ಕಛೇರಿಯ ಆದೇಶ ಸಂ.ಡಿಆರ್‌ಎಸ್/ಎಲ್‌ಕ್ಯೂಡಿ/ ಡಿಎಲ್‌ಎಸ್/ಸಿಆರ್/2014–15 ದಿನಾಂಕ:29–3–2014.

2) ಈ ಕಛೇರಿಯ ಆದೇಶ ಸಂ.ಡಿಆರ್‌ಎಸ್/ಎಲ್‌ಕ್ಯೂಡಿ/ ಡಿಎಲ್‌ಎಸ್/ಸಿಆರ್/2014–15 ದಿನಾಂಕ:3–2–2015.

3)ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂ.ಸನಿಶಿ24/ಸಮಾಪನೆ/ಸಿಆರ್– /2014–15 ದಿನಾಂಕ:28–3–2015.

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ **"ಶಿವಮೊಗ್ಗ ಸಹಕಾರ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ** ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಆದೇಶ ಸಂ.ಎಆರ್‌ಎಸ್/8850/82–83 ದಿನಾಂಕ:29–11–1982 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ನೋಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ದಿನಾಂಕ:25–9–2011 ರಂದು ನಡೆದ ಸಂಘದ 2010–11 ನೇ ಸಾಲಿನ ಸಂಘದ ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ಸಮಾಪನೆಗೊಳಿಸಲು ತೀರ್ಮಾನಿಸಿರುತ್ತಾರೆ. ಆದಕಾರಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಶ್ರೀಮತಿ ಲಕ್ಷ್ಮಿ.ವಿ. ದ್ವಿತೀಯದರ್ಜೆ ಸಹಾಯಕರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರನ್ನು ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಆಸ್ತಿ–ಜವಾಬ್ದಾರಿಗಳನ್ನು ವಿಲೇವಾರಿಗಾಗಿ ಈ ಕಛೇರಿಯಿಂದ ಆಧ್ಯತಾ ಪಟ್ಟಿ ಅನುಮೋದನೆ ಪಡೆದಿರುತ್ತಾರೆ. ಅನುಮೋದಿತ ಆಧ್ಯತಾ ಪಟ್ಟಿಗೆ ಅನುಸಾರವಾಗಿ ದಿನಾಂಕ:25–3–2015 ರಂದು ನಡೆದ ಸಮಾಪನಾಧಿಕಾರಿಯ ಸಭೆಯಲ್ಲಿ ಸಂಘದ 2013–14ನೇ ಸಾಲಿನ ಆಡಿಟ್ ಆದ ಆಸ್ತಿ–ಜವಾಬ್ದಾರಿ ತ:ಖ್ತೆಯ ಅನುಸಾರ ಇರುವ ಆಸ್ತಿ–ಜವಾಬ್ದಾರಿಗಳ ವಿಲೇವಾರಿ ಮಾಡಿರುತ್ತಾರೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಇವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ನೋಂದಣಿ ರದ್ದುಪಡಿಸಲು ಉಲ್ಲೇಖ (3) ರಂತೆ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಶಿಫಾರಸ್ಸು ಪತ್ರ ಹಾಗೂ ದಿನಾಂಕ:25–3–2015 ರಂದು ನಡೆಸಿದ ಸಮಾಪನಾಧಿಕಾರಿಗಳ ಸಭೆ ನಡವಳಿ ಮತ್ತು ದಿನಾಂಕ:25–3–2015 ರ ಅಂತ್ಯಕ್ಕೆ ಇದ್ದಂತೆ ಸಲ್ಲಿಸಿರುವ ದೃಢೀಕೃತ ಆರ್ಥಿಕ ತ:ಖ್ತೆಗಳನ್ನು ಆಧರಿಸಿ, ಸದರೀ ಸಂಘದ ಆಸ್ತಿ–ಜವಾಬ್ದಾರಿಗಳನ್ನು ಸಂಪೂರ್ಣವಾಗಿ ವಿಲೇವಾರಿ ಮಾಡಿ ಶೂನ್ಯಗೊಳಿಸಿದ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ : ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–18/2014–15, ದಿನಾಂಕ:31–03–2015.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1959, ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/139/ಸಿಎಲ್‌ಎಂ/2010 ಬೆಂಗಳೂರು ದಿನಾಂಕ:17–02–2011ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಎ.ಎಸ್.ಜಯಪ್ಪ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಗೊಂಡಿದ್ದ **"ಶಿವಮೊಗ್ಗ ಸಹಕಾರ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ.,ಶಿವಮೊಗ್ಗ** ಈ ಸಹಕಾರ ಸಂಘದ ನೋಂದಣಿ ಸಂ.ಎಆರ್‌ಎಸ್/8850/82–83 ದಿನಾಂಕ:29–11–1982 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಆ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31–3–2015 ರಂದು ನೀಡಲಾಗಿದೆ.

**P.R. 707**

**ಎ.ಎಸ್.ಜಯಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಕಲಘಟಗಿ**

**ಸೇವೆಯಿಂದ ವಜಾ ಮಾಡಿದ ಆದೇಶ**

**ಸಂಖ್ಯೆ : ಎ1 ಪ್ರಾಶಾಶಿ : ಎಂವಿಬಿ : ಅಗೈ : 2011–12, ದಿನಾಂಕ : 22–09–2014.**

ವಿಷಯ : ಶ್ರೀಮತಿ ಎಂ.ವಿ. ಬೆಳ್ಳೇರಿಮಠ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸಂಗೇದೇವರಕೊಪ್ಪ ತಾ : ಕಲಘಟಗಿ ಜಿಲ್ಲಾ: ಧಾರವಾಡ ಇವರು ದೀರ್ಘಕಾಲದವರೆಗೆ ಶಾಲಾ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರ ಹಾಜರ ಉಳಿದಿದ್ದರಿಂದ ಸೇವೆಯಿಂದ ವಜಾ ಮಾಡುವ ಕುರಿತು.

ಉಲ್ಲೇಖ :
1. ಈ ಕಛೇರಿಯ ನೋಟೀಸುಗಳ ದಿನಾಂಕ : 25–08–2012, 10–10–2012, 2–11–2012, 07–01–2013.
2. ಮಾನ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ನೋಟೀಸು ಸಂಖ್ಯೆ : ಇ5 : ಎವಿಬೆ : ದೂರು : ಅಗ್ಯೆ : 12–13, ದಿನಾಂಕ : 28–12–2012
3. ಮಾನ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ದಿನಾಂಕ : 18–03–2013 ಪತ್ರಿಕಾ ಪ್ರಕಟಣೆ ನೀಡಲು ಅನುಮತಿ ನೀಡಿದ ಪತ್ರ
4. ಸಂಯುಕ್ತ ಕರ್ನಾಟಕ ದಿನಪತ್ರಿಕೆ ದಿನಾಂಕ : 08–04–2013ರಂದು ನೀಡಿದ ಪತ್ರಿಕಾ ಪ್ರಕಟಣೆ
5. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 108
6. ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ ನಿಯಮಾವಳಿಗಳು 1957ರ ನಿಯಮ 14(2)
7. ಮಾನ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಪತ್ರ ಸಂಖ್ಯೆ : ಎ3 : ಅಗ್ಯೆಹಾ : ಎಂವಿಬೆ : 49 : 13–14/1525, ದಿನಾಂಕ : 16–08–2014.

**ಪೀಠಿಕೆ :**

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀಮತಿ ಎಂ.ವಿ. ಬೆಳ್ಳೇರಿಮಠ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸಂಗೇದೇವರಕೊಪ್ಪ ತಾ : ಕಲಘಟಗಿ ಜಿಲ್ಲಾ : ಧಾರವಾಡ ಇವರು ದಿನಾಂಕ : 01–03–2011 ರಿಂದ ಇವತ್ತಿನ ದಿನಾಂಕದವರೆಗೆ ಸತತ ಶಾಲಾ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರ ಹಾಜರ ಉಳಿದು ಶಾಲೆಯ ಕೆಲಸ ಕಾರ್ಯ, ಪಾಠಗಳಿಗೆ ತೊಂದರೆ ಉಂಟು ಮಾಡಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 108ನ್ನು ಉಲ್ಲಂಘಿಸಿರುತ್ತಾರೆ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1966 ನಿಯಮ 3 ನ್ನು ಉಲ್ಲಂಘಿಸಿ ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ವರ್ತನೆ ಮಾಡಿ ಕರ್ತವ್ಯದಲ್ಲಿ ಶ್ರದ್ಧೆ, ನಿಷ್ಠೆ ಇಲ್ಲದ ಬಗ್ಗೆ ಸಾಬೀತುಪಡಿಸಿ, ಸರ್ಕಾರಿ ನೌಕರಿಯಲ್ಲಿ ಮುಂದುವರೆಯುವ ಇಚ್ಛೆಯಿಲ್ಲವೆಂಬುದನ್ನು ಸಹ ಸಾಬೀತುಪಡಿಸಿರುತ್ತಾರೆ.

ಹಾಗೂ ಈ ಕಾರ್ಯಾಲಯದ ಉಲ್ಲೇಖ (1)ರನ್ವಯ ಅವರಿಗೆ ನೀಡಿದ ಅನೇಕ ನೋಟಿಸುಗಳಿಗೆ ಹಾಗೂ ಮಾನ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರು ಉಲ್ಲೇಖ 2 ರನ್ವಯ ನೀಡಿದ ಕಾರಣ ಕೇಳುವ ನೋಟಿಸ್‌ಗೆ ಸಹ ಸ್ಪಂದಿಸದೇ ಮೇಲಾಧಿಕಾರಿಗಳ ತಿಳುವಳಿಕೆಯ ನೋಟಿಸು ಹಾಗೂ ಆದೇಶಗಳಿಗೆ ಅಸಡ್ಡೆ ಮನೋಭಾವ ತೋರಿಸಿರುತ್ತಾರೆ. ಮತ್ತು ಸಂಯುಕ್ತ ಕರ್ನಾಟಕ ದಿನಪತ್ರಿಕೆ ದಿನಾಂಕ : 08–04–2013 ರಲ್ಲಿ ಅವರಿಗೆ ಅಂತಿಮ ನೋಟಿಸು ನೀಡಿ ಈ ಪ್ರಕಟಣೆಯ ಹದಿನೈದು ದಿವಸಗಳಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಲಾಗಿತ್ತು. ಆದಾಗ್ಯೂ ಸಹ ಅವರು ಶಾಲೆಯ ಕರ್ತವ್ಯಕ್ಕೆ ಹಾಜರಾಗದೇ ಇರುವದು ಅವರಿಗೆ ಸರ್ಕಾರಿ ನೌಕರಿಯಲ್ಲಿ ಮುಂದುವರಿಯುವ ಇಚ್ಛೆ ಇಲ್ಲವೆಂದು ಸರ್ಕಾರಕ್ಕೆ ಮನವರಿಕೆಯಾಗಿದೆ. ಅವರು ದಿನಾಂಕ : 01–03–2011ರ ರಜಾ ಅರ್ಜಿಯಲ್ಲಿ ಕಾಣಿಸಿದ ರಜಾ ಅವಧಿಯ ಖಾಯಂ ವಿಳಾಸದಲ್ಲಿ ಅವರೇ ನಮೂದಿಸಿ ಕಳಿಸಿದ ವಿಳಾಸಕ್ಕೆ ಕಳಿಸಿದ ಪರತ ಪಾವತಿಗಳು ಈ ಕಛೇರಿಗೆ ತಲುಪಿದ್ದು ಅವರಿಗೆ ನೋಟಿಸುಗಳು ತಲುಪಿರುತ್ತವೆಯೆಂದು ದೃಢಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ ನಿಯಮಗಳು 14(2)ರನ್ವಯ ಸೇವೆಯಿಂದ ವಜಾಗೊಳಿಸಲು ಅವಕಾಶ ಕಲ್ಪಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀಮತಿ ಎಂ.ವಿ. ಬೆಳ್ಳೇರಿಮಠ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಸಂಗೇದೇವರಕೊಪ್ಪ ತಾ: ಕಲಘಟಗಿ ಜಿಲ್ಲಾ: ಧಾರವಾಡ ಇವರನ್ನು ದಿನಾಂಕ ; 01–03–2011 ರಿಂದ ಸತತವಾಗಿ ಶಾಲಾ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರು ಹಾಜರು ಉಳಿದಿದ್ದರಿಂದ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ ನಿಯಮಾವಳಿಗಳು 1957ರ ನಿಯಮ 14(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಾನು ಶ್ರೀ ವಿ.ಜಿ. ಪೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಲಘಟಗಿ ಜಿ : ಧಾರವಾಡ ಹಾಗೂ ಶಿಸ್ತು ಪ್ರಾಧಿಕಾರಿಗಳು ಪ್ರಾಥಮಿಕ ಶಾಲಾ ಶಿಕ್ಷಕರು ಸದರಿ ಶಿಕ್ಷಕಿಯವರನ್ನು ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಂತ್ರಣ ಮತ್ತು ಮೆಲ್ಮನವಿ ನಿಯಮಗಳು 1957ರ ನಿಯಮ 8 (VIII)ರ ಪ್ರಕಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ.

**P.R. 621**

**ಕ್ಷೇತ್ರ ಶಿಕ್ಷಣಾಧಿಕಾರಿಗಳು**
ಕಲಘಟಗಿ, ಜಿ : ಧಾರವಾಡ

## Commercial Taxes Department

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU.

**Present:** **RITVIK PANDEY, IAS,**
Commissioner of Commercial Taxes. (Karnataka) Bengaluru.

**Sub:** KVAT Act, 2003 - Clarification regarding rate of tax applicable on Nickel, Titanium and articles thereof - reg.

